ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 20 ನೇ ಮಾರ್ಚ್, 2020

ನೆರೆ ಪೀಡಿತ ಜಿಲ್ಲೆಗಳಲ್ಲಿ NREGA ಯೋಜನೆಯ ಕಾಮಗಾರಿಗಳ ಅನುಷ್ಠಾನದಲ್ಲಿನ ತೊಡಕುಗಳ ಕುರಿತು

ಶ್ರೀ ಟಿ. ಎ. ಶರವಣ(ವಿಧಾನಸಭೆಯಿಂದ ಚುನಾಯಿತರಾದವರು):-

1375 (1592) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) NREGA ಯೋಜನೆಯಡಿ ಕೈಗೊಳ್ಳಲಾಗುವ ಕಾಮಗಾರಿಗಳಲ್ಲಿ ಮಾನವ ಕೂಲಿ ಮತ್ತು ಸಾಮಗ್ರಿ ವೆಚ್ಚದ ಅನುಪಾತದ ಪ್ರಮಾಣವೆಷ್ಟು ;

(ಆ) ರಾಜ್ಯದಲ್ಲಿ 2019-20 ನೇ ಸಾಲಿಗೆ ಕೂಲಿ ಮತ್ತು ಸಾಮಗ್ರಿ ವೆಚ್ಚದ ಅನುಪಾತವನ್ನು ಕಾಪಾಡಿಕೊಂಡು ಕಾಮಗಾರಿಗಳನ್ನು ನಿರ್ವಹಿಸಿದ ಜಿಲ್ಲೆಗಳು ಹಾಗೂ ಅನುಪಾತವನ್ನು ಮೀರಿದ ಜಿಲ್ಲೆಗಳು ಯಾವುವು ; (ಅಂಕಿಅಂಶಗಳ ಸಮೇತ ವಿವರವನ್ನು ನೀಡುವುದು)

(ಇ) ಮಾನವ ಕೂಲಿ ಮತ್ತು ಸಾಮಗ್ರಿ ವೆಚ್ಚದ ಅನುಪಾತದಲ್ಲಿ ವ್ಯತ್ಯಾಸಗಳುಂಟಾದಲ್ಲಿ ಸಾಮಗ್ರಿ ವೆಚ್ಚವನ್ನು ಪಾವತಿಸಲು ಯೋಜನೆಯಡಿ ಅವಕಾಶಗಳಿದೆಯೇ ; ಇಲ್ಲವಾದಲ್ಲಿ, ಅದನ್ನು ಹೇಗೆ ಸರಿಪಡಿಸಲಾಗುತ್ತದೆ ;

(ಈ) ಈ ಯೋಜನೆಯಡಿ ಹೆಚ್ಚು ಮಾನವ ಕೂಲಿಯನ್ನು ಬಯಸುವ ಪ್ರಮುಖವಾದ ಕಾಮಗಾರಿಗಳು ಯಾವುವು ;

(ಉ) ನೆರೆ ಪೀಡಿತ ಜಿಲ್ಲೆಗಳಲ್ಲಿ ಹೆಚ್ಚು ಮಾನವ ಕೂಲಿಯನ್ನು ಬಯಸುವ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಗುತ್ತಿಲ್ಲ ಎಂಬ ಕೂಗು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದರೇ, ನೆರೆ ಪೀಡಿತ ಪ್ರದೇಶಗಳಲ್ಲಿ ಆಸ್ತಿಗಳ ದುರಸ್ಥಿಗೆ ಸರ್ಕಾರದ ಮುಂದಿರುವ ಮಾರ್ಗೋಪಾಯಗಳಾವುವು ?